ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 1, March-April 2024, Pp. 50-54
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಸಾಮಾಜಿಕ ಬದಲಾವಣೆಯಲ್ಲಿ ಉದ್ಯಮಶೀಲತೆಯ ಪಾತ್ರ: ಒಂದು ಸಮಾಜಶಾಸ್ತ್ರೀಯ ಅಧ್ಯಯನ

**ಡಾ. ಸಂಗನಗೌಡ ಶಿವನಗೌಡ[1] ಮತ್ತು ನಿಂಗಪ್ಪ ಹೆಚ್[2]**

[1]ಸಹ ಪ್ರಾಧ್ಯಾಪಕರು ಸಮಾಜಶಾಸ್ತ್ರ, [2]ಸಂಶೋಧನಾ ವಿದ್ಯಾರ್ಥಿ,
ಸರಕಾರಿ ಪದವಿ ಮಹಾವಿದ್ಯಾಲಯ, ಸಿಂಧನೂರು.

***Abstract:***
*ರಾಷ್ಟ್ರದ ಮೊದಲ ಪ್ರಧಾನಮಂತ್ರಿ ನೆಹರು ಅವರು ಉದ್ಯಮಗಳನ್ನು ಆಧುನಿಕ ಭಾರತದ ದೇವಾಲಯಗಳು ಎಂದು ಕರೆದಿದ್ದರು. ಏಕೆಂದರೆ ಚಿಲ್ಲರೆ ವ್ಯಾಪಾರ ಚಿನ್ನದಂತಹ ವ್ಯವಹಾರ ಎನ್ನುವ ನಾಣ್ನುಡಿಯಂತೆ ಸಾಮಾಜಿಕ ವ್ಯವಸ್ಥೆಯು ವರ್ಗ ಮತ್ತು ಅಂತಸ್ತನ್ನು ಹೊಂದಿರುವ ಹಾಗೂ ಬಹುವಿಧದ ಬೇಡಿಕೆ ಮತ್ತು ಪೂರೈಕೆಯನ್ನು ಹೊಂದಿದ ಜನರ ಅವಶ್ಯಕತೆಯನ್ನು ಈಡೇರಿಸುವ ಉತ್ಪನ್ನಗಳನ್ನು ಉದ್ದಿಮೆ ಪೂರೈಸುತ್ತದೆ.*

***Keywords:*** *ಸುಸ್ಥಿರ ದೃಷ್ಟಿ, ಸ್ತರವಿನ್ಯಾಸ, ಉದ್ದಿಮೆ, ಸಾಮಾಜಿಕ ಉದ್ಯಮ.*

## ಪೀಠಿಕೆ

ಉದ್ಯಮಶೀಲತೆಯು ಆರ್ಥಿಕ ಬೆಳವಣಿಗೆಯ ಹಿಂದಿರುವ ಪ್ರೇರಕ ಶಕ್ತಿ. ಒಂದು ದೇಶದ ಆರ್ಥಿಕ ಬೆಳವಣಿಗೆಯನ್ನು ನಾವು ಆ ದೇಶದಲ್ಲಿನ ಉದ್ಯಮಶೀಲತೆಯ ಹಿನ್ನಲೆಯಲ್ಲಿ ವಿವರಿಸಬಹುದು. ಜಗತ್ತಿನಲ್ಲಿ ಆರ್ಥಿಕ ಬೆಳವಣಿಗೆ ಹೊಂದಿದ ದೇಶಗಳು ಅತ್ಯಧಿಕ ಉದ್ಯಮಶೀಲರನ್ನು ಹೊಂದಿರುತ್ತವೆ. ಉದ್ಯಮಶೀಲತೆ ಮಹತ್ವವನ್ನು ಅರಿತ ಸರಕಾರಗಳು ಇಂದು ಉದ್ಯಮಶೀಲತೆಯ ಬೆಳವಣಿಗೆಗೆ ಅತ್ಯಧಿಕ ಮಹತ್ವ ಕೊಡ ಮಾಡತ್ತಲಿವೆ.

ಉದ್ಯಮಶೀಲತೆಗೆ ಆಂಗ್ಲ ಭಾಷೆಯಲ್ಲಿ Entrepreneurship ಎನ್ನುತ್ತಾರೆ. ಈ ಪದವು ಫ್ರೆಂಚ್ ಭಾಷೆಯ Entereprende ಎಂಬ ಪದದಿಂದ ಉತ್ಪತ್ತಿಯಾಗಿದೆ. ಉದ್ಯಮಶೀಲತೆಯೆಂದರೆ ಯಾವುದಾದರೂ ಒಂದು ಚಟುವಟಿಕೆಯನ್ನು ಕೈಗೊಳ್ಳುವುದು. ಉದ್ಯಮಶೀಲತೆ ಎಂಬುದು ಒಂದು ಉದ್ದಿಮೆಯನ್ನು ಸ್ಥಾಪಿಸಿ ಮುನ್ನಡೆಸಿಕೊಂಡು ಹೋಗುವುದು ಎಂಬರ್ಥ ಕೊಡುತ್ತದೆ.

ಉದ್ಯಮವನ್ನು ಚೆನ್ನಾಗಿ ನಡೆಸಿದಾಗ ಅದು ನಡೆಸುವವನ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸುತ್ತದೆ. ಇದರ ಜೊತೆಗೆ ಅದು ದೇಶದ ಆರ್ಥಿಕತೆಗೂ ಮಹತ್ವದ ಕೊಡುಗೆ ನೀಡುತ್ತದೆ. ಉದ್ಯಮಶೀಲತೆಯು ಇದೊಂದು ಸೃಜನಶೀಲ ಅಂದರೆ ಹೊಸದನ್ನು ಸೃಷ್ಟಿಸುವ ಕ್ರಿಯೆ ಇದರಲ್ಲಿ ಕೆಲವು ಅಪಾಯಗಳು ಇರುತ್ತವೆ ಇದೊಂದು ಸಾಹಸ ಮತ್ತು ಗಂಡಾಂತರಗಳನ್ನು ಹೊಂದಿರುವ ಕ್ಷೇತ್ರ ಆದ್ದರಿಂದಲೇ ಉದ್ಯಮಶೀಲರನ್ನು ಸಾಹಸೋದ್ಯಮಿ ಗಳು ಎಂದು ಕರೆಯುತ್ತಾರೆ.

ಎಚ್ ಬೊವೆನ್ ರವರು 1953ರಲ್ಲಿ ತಮ್ಮ ಸೋಶಿಯಲ್ 'ರೆಸ್ಪಾನ್ಸಿಬಿಲಿಟೀಜ್ ಆಫ್ ಬಿಜಿನೆಸ್ಮೆನ್'

***Please cite this article as:*** ಸಂಗನಗೌಡ ಶಿವನಗೌಡ & ನಿಂಗಪ್ಪ ಹೆಚ್. (2024). ಸಾಮಾಜಿಕ ಬದಲಾವಣೆಯಲ್ಲಿ ಉದ್ಯಮಶೀಲತೆಯ ಪಾತ್ರ: ಒಂದು ಸಮಾಜಶಾಸ್ತ್ರೀಯ ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(1), 50–54.

ಎಂಬ ಗ್ರಂಥದಲ್ಲಿ ಮೊದಲ ಬಾರಿಗೆ ಸಾಮಾಜಿಕ ಉದ್ಯಮಶೀಲತೆ ಎಂಬ ಪದವನ್ನು ಬಳಸಿದ್ದಾರೆ. ನಂತರ 1980 ಮತ್ತು 1990 ರ ದಶಕದಲ್ಲಿ ಬಿಲ್ ಡ್ರೇಟನ್, ಚಾರ್ಲ್ಸ್ ಲೀಡ್ ಬೀಟರ್ ಮತ್ತು ಇತರರು ಈ ಪದವನ್ನು ಬಳಸಿದರು. ಸಾಮಾಜಿಕ ಉದ್ಯಮಶೀಲತೆಯು ಸಾಮಾಜಿಕ ಕಾಳಜಿ ತೋರಿಸುವ ವ್ಯವಹಾರಿಕ ಚಟುವಟಿಕೆಯಾಗಿದೆ. ಇದು ಸ್ವಾರ್ಥಕ್ಕೆ ಕಡಿಮೆ ಮಹತ್ವ ಕೊಡುತ್ತದೆ ಮತ್ತು ಸಮಾಜಕ್ಕೆ ಅತ್ಯಧಿಕ ಮಹತ್ವ ನೀಡುತ್ತದೆ ಸಮಾಜ ಪರ, ಸಮಾಜದಲ್ಲಿನ ಹಿಂದುಳಿದ ಜನರ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿಯ ಕಡೆಗೆ ಸಾಮಾಜಿಕ ಉದ್ಯಮವು ಗಮನ ಹರಿಸುತ್ತದೆ.

ಸಾಮಾಜಿಕ ಉದ್ಯಮಶೀಲತೆಯನ್ನು ಒಂದು ಉದಾತ್ತ ಕಾರಣಕ್ಕಾಗಿ ವ್ಯಾಪಾರ ಮಾಡವುದು, ವಸ್ತುಗಳನ್ನು ಉತ್ಪಾದಿಸುವುದು ಎಂದು ವ್ಯಾಖ್ಯಾನಿಸಬಹುದು. ಈ ರೀತಿಯ ಉದ್ಯಮಶೀಲತೆಯು ಜನರ ಜೀವನವನ್ನು ಸುಧಾರಿಸುವ ಪ್ರಯತ್ನದಲ್ಲಿ ವ್ಯಾಪಾರ ಮತ್ತು ಸಮಾಜಿಕ ಅಂಶಗಳನ್ನು ತಿಳಿಯಪಡಿಸುತ್ತದೆ.

2006 ರಲ್ಲಿ ನೊಬೆಲ್ ಶಾಂತಿ ಪ್ರಶಸ್ತಿಯನ್ನು ಪಡೆದ ಬಾಂಗ್ಲಾ ದೇಶದ ಮಹಮದ್ ಯೂನಸ್ ಅವರು ಬಾಂಗ್ಲದೇಶದ ಗ್ರಾಮೀಣ ಮಹಿಳೆಯರು ತಮ್ಮ ಕೌಶಲ್ಯಗಳನ್ನು ವೃದ್ಧಿಸಿಕೊಳ್ಳಲು, ಉದ್ದಿಮೆಯನ್ನು ಸ್ಥಾಪಿಸಿ ಆದಾಯವನ್ನು ಗಳಿಸಲು ಮತ್ತು ಆರ್ಥಿಕವಾಗಿ ಸ್ವತಂತ್ರರಾಗಲು ಗ್ರಾಮೀಣ ಪ್ರದೇಶದ ವ್ಯಾಪ್ತಿಯಲ್ಲಿ 'ಗ್ರಾಮೀಣ ಬ್ಯಾಂಕ್'ಗಳನ್ನು ತೆರೆದರು. ಈ ಬ್ಯಾಂಕ್ ಮೂಲಕ ಮಹಿಳೆಯರಿಗೆ ಕಿರುಸಾಲ ನೀಡಿ ಅದರ ಮೂಲಕ ಮಹಿಳೆಯರನ್ನು ಸಬಲೀಕರಣಗೊಳಿಸಲಾಗುತ್ತಿದೆ. ಪ್ರಸ್ತುತ ಈ ಬ್ಯಾಂಕ್ 2500 ಕ್ಕೂ ಹೆಚ್ಚು ಶಾಖೆಗಳನ್ನು ಹೊಂದಿದೆ.

ಪ್ರೊ. ಯೂನಸ್ ಅವರು ಸಾಮಾಜಿಕ ಅಭಿವೃದ್ಧಿಗೆ ಕಿರುಸಾಲ ಹೆಚ್ಚು ಪರಿಣಾಮಕಾರಿ ಎಂದು ಪ್ರತಿಪಾದಿಸಿದರು. ಕಿರುಸಾಲದ ಮಹತ್ವವನ್ನು ತಿಳಿಸುವುದರ ಜೊತೆಗೆ 1997ರಲ್ಲಿ, 'ದಿ ಗ್ರಾಮೀಣ ಬ್ಯಾಂಕ್' ಬಾಂಗ್ಲಾದೇಶದ 42 ಮಹಿಳಾ ಬಾಸ್ಕೆಟ್ ನೇಯ್ಗೆಕಾರರಿಗೆ 27 ಡಾಲರ್ ಸಾಲ ನೀಡಿತ್ತು. ಮಹಿಳೆಯರು ಸಾಲವನ್ನು ಮರುಪಾವತಿ ಮಾಡುವುದರ ಜೊತೆಗೆ ಕನಿಷ್ಠ ಲಾಭ ಪಡೆದರು. ಪ್ರಸ್ತುತ, ಈ ಬ್ಯಾಂಕ್ ಗ್ರಾಮೀಣ ಜನಸಂಖ್ಯೆಯ ಶೇ.93 ರಷ್ಟು ಮಹಿಳೆಯರಿಗೆ ಬೆನ್ನೆಲುಬಾಗಿ ನಿಂತಿದೆ. ಪ್ರಸ್ತುತ ಬಾಂಗ್ಲಾದೇಶದಲ್ಲಿ ಒಂಬತ್ತು ಮಿಲಿಯನ್ ಸದಸ್ಯರಿದ್ದಾರೆ.

**ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮಗಳು**

ಪ್ರಸ್ತುತ ದಿನಗಳಲ್ಲಿ ಪ್ರತಿಯೊಂದು ವೃತ್ತಿಯು ನಾವೀನ್ಯತೆಯು ಪಡೆಯುತ್ತಿದೆ. ಈ ಹಿನ್ನೆಲೆಯಲ್ಲಿ ಕೌಶಲ್ಯ ಬೆಳೆಸಿಕೊಳ್ಳುವುದು ಅತ್ಯಂತ ಅಗತ್ಯವಾಗಿದೆ. ಆದ್ದರಿಂದ ಸರ್ಕಾರ, ಸರ್ಕಾರೇತರ ಸಂಸ್ಥೆಗಳು, ಧಾರ್ಮಿಕ ದತ್ತಿ ಸಂಸ್ಥೆಗಳು, ಕಂಪೆನಿಗಳು ಯುವಕರಿಗೆ ಕೌಶಲ್ಯ ತರಬೇತಿಯನ್ನು ನೀಡುವುದು ಆದ್ಯ ಕರ್ತವ್ಯವಾಗಿದೆ ಹಾಗೂ ಸಾಮಾಜಿಕ ಹೊಣೆಗಾರಿಕೆಯಾಗಿದೆ. ಇದಕ್ಕೆ ಉತ್ತಮ ನಿದರ್ಶನವೆಂದರೆ ಸರ್ಕಾರದ ಸಹಭಾಗಿತ್ವದಲ್ಲಿ ರೀಪೇರಿ ಮತ್ತು ಮರು ಬಳಕೆ, ಹಾಗೂ ಬಿಡಿ ಭಾಗಗಳನ್ನು ಉತ್ಪಾದಿಸುವ, ಜೋಡಿಸುವುದಕ್ಕೆ ತರಬೇತಿ ಆಯೋಜಿಸುವುದು. ಪ್ರತಿ ಗ್ರಾಮ ಪಂಚಾಯತಿಯಿಂದ ಚಾಲಕ ವೃತ್ತಿ ನಿರ್ವಹಿಸಲು ತರಬೇತಿ ನೀಡುವುದು ಇತ್ಯಾದಿ. ಇವುಗಳ ಪ್ರಾತಿನಿಧ್ಯ ಕಡಿಮೆ ಇದ್ದರು ಸಹ ಪ್ರತಿಯೊಬ್ಬರು ಒಂದಲ್ಲಾ ಒಂದು ಕೌಶಲ್ಯವಿದ್ದರೆ ಸಾಮಾಜಿಕ ವ್ಯವಸ್ಥೆಯ ಅಂಚಿನಲ್ಲಿ ಇರುವವರ ಶ್ರೇಯೋಭಿವೃದ್ಧಿಗೆ ಕಾರಣವಾಗುತ್ತದೆ.

**ಸಾಮಾಜಿಕ ಉದ್ಯಮಶೀಲತೆಯ ಉದ್ದೇಶಗಳು**

1. ಸಾಮಾಜಿಕ ಬದಲಾವಣೆಗೆ ತಕ್ಕಂತೆ ಕೌಶಲ್ಯಗಳ ವೃದ್ಧಿ ಮತ್ತು ತರಬೇತಿ
2. ಸಮಾಜಿಕ ಸ್ತರವಿನ್ಯಾಸದಲ್ಲಿನ ಅಂತರವನ್ನು ನಿವಾರಿಸುವುದಕ್ಕೆ ಉದ್ದಿಮೆಯಲ್ಲಿ ಪ್ರಧಾನ ಪಾತ್ರ ನಿರ್ವಹಿಸುವುದು.

3. ಉದ್ಯಮಶೀಲತೆಯು ಸಾಮಾಜಿಕ ಹೊಣೆಗಾರಿಕೆ ಮತ್ತು ಬದಲಾವಣೆಯನ್ನು ತರುವುದು.
4. ಸಾಮಾಜಿಕ ಒಳಗೊಳ್ಳುವಿಕೆಯ ಆಯಾಮಗಳನ್ನು ಆಧರಿಸುವಂತೆ ಉದ್ದಿಮೆಗಳನ್ನು ಸರ್ಕಾರ ಪ್ರೋತ್ಸಾಹಿಸುವುದು.
5. ಅಂಚಿಕೃತ ಜನರ ಆಶೋತ್ತರ ಈಡೇರಿಕೆಗೆ ಸಹಾಯ ಮಾಡುವುದು
6. ಮಾಜಿಕ ಅಸಮಾನತೆ ಮತ್ತು ಸ್ಥಳೀಯ ಸಮಸ್ಯೆಗಳತ್ತ ನಿಗಾವಹಿಸುವುದು.
7. ಜಾಗತಿಕ ಪ್ರಭಾಗದೊಂದಿಗೆ ಸುಸ್ಥಿರ ಅಭಿವೃದ್ದಿಯನ್ನು ಸಾಧಿಸುವುದು.

ಫ್ರಸಜ್ಕರ್ ಮತ್ತು ನೋವಾಕ್ ರವರು (Praskier and Nowak) ಸಾಮಾಜಿಕ ಉದ್ಯಮಶೀಲತೆಯ 5 ಆಯಾಮಗಳನ್ನು ಗುರುತಿಸಿದ್ದಾರೆ. ಅವುಗಳೆಂದರೆ ಸಾಮಾಜಿಕ ವಿಷನ್, ಸಾಮಾಜಿಕ ನಾವೀನ್ಯತೆ, ಸಾಮಾಜಿಕ ಬದಲಾವಣೆ, ಉದ್ಯಮಶೀಲತೆ ಮನೋಭಾವ, ಹಾಗೂ ವ್ಯಕ್ತಿತ್ವ ಬೆಳವಣಿಗೆ.

***ಸಾಮಾಜಿಕ ಮಿಷನ್***

ಸಾಮಾಜಿಕ ಶ್ರೇಯೋಭಿವೃದ್ಧಿಗೆ ಶ್ರಮಿಸುವ ವಿವಿಧ ವರ್ಗಗಳ ಜನರ ವೃತ್ತಿಗಳಿಗೆ ಅನುಗುಣವಾಗಿ ಉದ್ಯಮ ಸ್ಥಾಪನೆ ಮತ್ತು ನಿರ್ವಹಣೆ ಬಗ್ಗೆ ಯುವಪೀಳಿಗೆ ಮನಸ್ಸಿನಲ್ಲಿ ಧನಾತ್ಮಕ ಆಲೋಚನೆ ಮಾಡುವಂತೆ ಹಾಗೂ ಆರ್ಥಿಕ ಚಟುವಟಿಕೆಯಲ್ಲಿ ಭಾಗವಹಿಸುವಂತೆ ಪ್ರೇರೆಪಿಸುವುದು ಸಾಮಾಜಿಕ ವಿಷನ್‌ನ ಮುಖ್ಯ ಧ್ಯೇಯವಾಗಿದೆ.

***ಸಾಮಾಜಿಕ ನಾವೀನ್ಯತೆ***

ವಿವಿಧ ಸ್ತರವಿನ್ಯಾಸದಲ್ಲಿ ರಚನೆಯಾಗಿರುವ ಭಾರತೀಯ ಸಮಾಜದಲ್ಲಿ ಸಾಂಪ್ರದಾಯಿಕ ವೃತ್ತಿಗಳ ಆಧುನಿಕ ಸ್ಪರ್ಶದೊಂದಿಗೆ ಮತ್ತು ಮಾರುಕಟ್ಟೆಯ ಬೇಡಿಕೆಗಳಿಗೆ ಅನುಗುಣವಾಗಿ ಉತ್ಪಾದನಾಂಗಗಳಲ್ಲಿ ಯುವಪೀಳಿಗೆ ಮತ್ತು ನುರಿತ ಮಾನವ ಸಂಪನ್ಮೂಲ ಬಳಸಿಕೊಂಡು ಗ್ರಾಹಕರಿಗೆ ಕೈಗೆಟ್ಟುಕುವ ದರದಲ್ಲಿ ಉತ್ಪಾದನೆಯನ್ನು ಕೈಗೊಳ್ಳುವುದು.

***ಸಾಮಾಜಿಕ ಬದಲಾವಣೆ***

ಸಾಮಾಜಿಕ ಬದಲಾವಣೆಯು ಸಮುದಾಯದ ಅಂಚಿಗೆ ಇರುವ ವ್ಯಕ್ತಿಗಳ ಸ್ವಭಾವದಲ್ಲಿ ಬದಲಾವಣೆ ತರುವುದಾಗಿದೆ. ಬದಲಾವಣೆಯು ಸಾಮಾಜಿಕ ಸ್ಥರವಿನ್ಯಾಸದಲ್ಲಿ ಸುಸ್ಥಿರ ದೃಷ್ಟಿಯೊಂದಿಗೆ ಬದಲಾವಣೆ ತರುವುದೆ ಸಾಮಾಜಿಕ ಬದಲಾವಣೆ ಮತ್ತು ಪ್ರತಿಯೊಬ್ಬ ವ್ಯಕ್ತಿಗಳ ವೈಯಕ್ತಿಕ ಜೀವನದಲ್ಲಿನ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಕಂಡುಕೊಂಡು ಜವಾಬ್ದಾರಿಯುತ ನಾಗರೀಕರನ್ನು ಸೃಷ್ಟಿಸುವುದೇ ಸಾಮಾಜಿಕ ಬದಲಾವಣೆ ಎನ್ನುವದು ಅಭಿಪ್ರಾಯ ಪಟ್ಟಿದ್ದಾರೆ.

***ಉದ್ಯಮಶೀಲತೆಯ ಮನೋಭಾವ***

ವ್ಯಕ್ತಿಯನ್ನು ವಾಣಿಜ್ಯೋದ್ಯಮೀಯನ್ನಾಗಿಸುವ ಮತ್ತು ಮಹತ್ವದ ಯೋಜನೆ ಹಾಗೂ ಆರ್ಥಿಕ ಚಟುವಟಿಕೆಗಳಿಂದ ವ್ಯಕ್ತಿಗಳ ಅರ್ಹತೆಗೆ ತಕ್ಕಂತೆ ಉದ್ಯೋಗ ಸೃಷ್ಟಿಸುವಂತಹದ್ದು ಸಾಮಾಜಿಕ ಜ್ವಲಂತ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಸಂಕಲ್ಪದೊಂದಿಗೆ, ಮಹ್ಮದ್ ಯೂನಸ್, ಮುರುಗಾನಂತಮ್ ರವರು ಪ್ರಸಿದ್ದಿ ಪಡೆದಿದ್ದಾರೆ.

***ವ್ಯಕ್ತಿತ್ವ ಬೆಳವಣಿಗೆ***

ಮಗು ಯಾರ ಗರ್ಭದಲ್ಲಿ ಜನಿಸುತ್ತದೆ ಎನ್ನುವಂತಹದ್ದು ಮುಖ್ಯವಲ್ಲ ಯಾವ ಪರಿಸರದಲ್ಲಿ ಬೆಳೆಯುತ್ತದೆ ಎನ್ನುವಂತಹದ್ದು ಮುಖ್ಯವಾಗಿರುತ್ತದೆ. ಈ ಉದ್ಯಮಶೀಲತೆಯು ಸಾಮಾಜಿಕ ವ್ಯವಸ್ಥೆಯಲ್ಲಿನ ಪ್ರತಿಯೊಬ್ಬ ವ್ಯಕ್ತಿಯ ಮನಸ್ಥಿತಿಯು ಸಹ ಆರ್ಥಿಕ ವಹಿವಾಟಿನ ಅಂಶಗಳ ಪ್ರಭಾವ ಬೀರಿದರೆ ವ್ಯಕ್ತಿತ್ವ ಬೆಳವಣಿಗೆಗೆ ಪೂರಕವಾಗಿ ಈ ಉದ್ಯಮಶೀಲತೆಯು ಕಾರ್ಯನಿರ್ವಹಿಸುತ್ತದೆ.

**ಸಾಮಾಜಿಕ ಉದ್ಯಮಶೀಲತೆ ಮತ್ತು ಸುಸ್ಥಿರ ಅಭಿವೃದ್ಧಿ**

ಸಾಮಾಜಿಕ ಉದ್ಯಮಶೀಲತೆಯು ಸಮಾಜದಲ್ಲಿರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಮತ್ತು ಸಮಾಜದ ಪ್ರತಿಯೊಬ್ಬ ಸದಸ್ಯನು ಸಹ ಉತ್ಪಾದನಾಂಗಗಳಲ್ಲಿ ಪಾಲ್ಗೊಳುವಂತೆ ಪ್ರೇರೆಪಿಸುವುದು ಹಾಗೂ ಹಲವಾರು ಸರ್ಕಾರೇತರ ಸಂಸ್ಥೆಗಳ ಸಹಭಾಗಿತ್ವದಲ್ಲಿ ಯುವ ಸಮೂಹಕ್ಕೆ ಕೌಶಲ್ಯವೃದ್ಧಿ ಮತ್ತು ತರಬೇತಿ ಕಾರ್ಯಗಳನ್ನು ಹಮ್ಮಿಕೊಳ್ಳವುದಾಗಿದೆ. ಇದಕ್ಕೆ ಪೂರಕವಾಗಿ ಸುಸ್ಥಿರ ಅಭಿವೃದ್ಧಿಯ ಗುರಿಗಳ ಈಡೇರಿಸಲು ಸಹಾಯಕವಾಗುತ್ತದೆ.

**ಉಪಸಂಹಾರ**

ಸಾಮಾಜಿಕ ಉದ್ಯಮಶೀಲತೆ ಸಾಂಪ್ರದಾಯಿಕ ವ್ಯಾಪಾರಗಳಿಗೆ ಬಲವಾದ ಪರ್ಯಾಯವನ್ನು ನೀಡುತ್ತದೆ. ಸಾಮಾಜಿಕ ಪ್ರಭಾವ ಮತ್ತು ಸುಸ್ಥಿರತೆಗೆ ಆದ್ಯತೆ ನೀಡುತ್ತದೆ. ಅದರ ವೈಶೀಷ್ಟಯಗಳನ್ನು ವಿಶ್ಲೇಷಿಸುವ ಮೂಲಕ, ಸಮುದಾಯಗಳನ್ನು ಸಬಲೀಕರಣಗೊಳಿಸುವಲ್ಲಿ ಮತ್ತು ಜಗತ್ತಿನಾದ್ಯಂತ ಧನಾತ್ಮಕ ಬದಲಾವಣೆಯನ್ನು ಉತ್ತೇಜಿಸುವಲ್ಲಿ ಸಾಮಾಜಿಕ ಉದ್ಯಮಶೀಲತೆಯ ಬದಲಾವಣೆಯ ಸಾಮರ್ಥ್ಯವನ್ನು ನಾವು ಮೆಚ್ಚಬಹುದು. ಬಹಳಷ್ಟು ಸವಾಲುಗಳನ್ನು ಎದುರಿಸುತ್ತಿರುವಂತೆ, ಸಾಮಾಜಿಕ ಉದ್ಯಮಶೀಲತೆಯ ಸಮಾನ ಮತ್ತು ಸಮೃದ್ಧ ಭವಿಷ್ಯಕ್ಕಾಗಿ ಭರವಸೆಯ ದಾರಿದೀಪವಾಗಿದೆ.

**ಪರಾಮರ್ಶನ ಗ್ರಂಥಗಳು**


- Alvord, S. H., Brown, L. D., & Letts, C. W. (2004). Social entrepreneurship and societal transformation: An exploratory study. *The Journal of Applied Behavioral Science*, 40(3).
- Beugré, C. (2016). *Social entrepreneurship: Managing the Creation of Social Value*. Routledge.
- Bhatt, P., & Altınay, L. (2013). How social capital is leveraged in social innovations under resource constraints? *Management Decision*, *51*(9), 1772–1792. https://doi.org/10.1108/md-01-2013-0041
- Bornstein, D. & Davis, S. (2010). *Social entrepreneurship: What Everyone Needs to Know?*. Oxford University Press.
- Peredo, A. M., & McLean, M. (2006). Social entrepreneurship: A critical review of the concept. *Journal of World Business*, *41*(1), 56–65. https://doi.org/10.1016/j.jwb.2005.10.007
- Sanjeev Kumar, M., & Puranik, V. (2019). Social Enterprise Policies in India: An Exploratory study. *International Journal of Management*, *9*. https://www.ijmra.us/project%20doc/2019/IJMIE_AUGUST2019/IJMRA-16071.pdf
- Shukla, M. (2020). *Social entrepreneurship in India: Quarter Idealism and a Pound of Pragmatism*. Sage Publications Pvt. Limited.
- *Social Enterprise An Overview Of The Policy Framework In India*. (2016). https://www.britishcouncil.in/sites/default/files/social_enterprise_policy_landscape_in_india_0.pdf

- *Social Enterprise: An Overview of the Policy Framework in India.* (2017, July 26). AVPN.
- *Social Entrepreneurship in India*. (n.d.). https://www.indembassybern.gov.in/docs/Social-Entreprenuership-Report.pdf
- *Social value economy A Survey of the Social Enterprise Landscape in India*. (2016).
- *The state of social enterprise in India*. (n.d.). https://www.britishcouncil.org/sites/default/files/bc-report-ch4-india-digital_0.pdf